# ಕಟುಕರೋಹಿಣಿ ಸಂವತ್ಸರದಲ್ಲಿ!

(ಚಿಕ್ಕ ಪ್ರಹಸನ)



೧೯೨೯

ಬೆಲೆ:

ಮೂರು ಆಣೆ.

ಶ್ರೀಮತಿ

ಪಡುಕೋಣೆ ಸೀತಾದೇವಿ.

# ಒಂದು ಮಾತು

ಈ ಚಿಕ್ಕ ದೃಶ್ಯವು 'ಬೇಬೀ ಪಾಥೆ'ಯ "A Day Will Come" ಎಂಬ ಚಲಚ್ಚಿತ್ರದಿಂದ ಪ್ರೇರಿತವಾದುದು. ಇದನ್ನು ಮೊದಲು ನಾನೇ ಬರೆದುದಾದಗೂ ಇದಕ್ಕೆ ತುಂಬಾ ಉಪ್ಪು ಖಾರವನ್ನು ಕೊಟ್ಟವರು ನನ್ನ ಪತಿಯವರು—ಶ್ರೀಯುತ ಪಡುಕೋಣೆ ರಮಾನಂದರಾಯರು—ಆಗಿರುವರು. ಆದುದರಿಂದ ಈ ಚಿಕ್ಕ ಕೃತಿಯು ನನ್ನದೆಂದು ನಾನು ಎಷ್ಟರ ಮಟ್ಟಿಗೆ ಹೇಳಬಹುದೋ ಅಷ್ಟರ ಮಟ್ಟಿಗೆ ಅವರದೂ ಆಗಿರುವುದೆಂದು ಮಾತ್ರ ಇಲ್ಲಿ ಸೂಚಿಸುವೆನು

ಇದನ್ನು ಮೊದಲು 'ರಾಷ್ಟ್ರಬಂಧು'ವಿನ ಸಾಹಿತ್ಯ ಸಂಚಿಕೆಯಲ್ಲಿ ಪ್ರಕಟಿಸಿದ ಶ್ರೀಯುತ ಕಡೆಂಗೋಡ್ಲು ಶಂಕರಭಟ್ಟರವರಿಗೂ, ಈಗ ಇದನ್ನು 'ವಸಂತ ಪುಷ್ಪ ಮಾಲೆ'ಯ ಪುಷ್ಪಗಳಲ್ಲಿ ಒಂದನ್ನಾಗಿ ಮಾಡಿಕೊಂಡಿರುವ ಶ್ರೀಯುತ ಕೋಟ ಶಿವರಾಮ ಕಾರಂತರಿಗೂ ನಾನು ತುಂಬಾ ಋಣಿಯಾಗಿರುವೆನು.

ಮಂಗಳೂರು,<br>೧೭—೭—೧೯೨೯.

ಪ. ಸೀತಾದೇವಿ.

# ಕಟುಕರೋಹಿಣಿ ಸಂವತ್ಸರದಲ್ಲಿ!

## ಮೊದಲನೆಯ ದೃಶ್ಯ.

[ ಸ್ಥಳ.—ಯೌವನಾಬಾಯಿಯ 'ಡ್ರಾಯಿಂಗ್ ರೂಮು' ಯೌವನಾಬಾಯಿಯು ಭೈರವಮ್ಮನನ್ನು ಕಾಫಿಫಲಾಹಾರದಿಂದ ಸತ್ಕರಿಸುತ್ತಿರುವಳು. ಸಮಯ—ಸಂಜೆ, ಐದುಕಾಲು ಘಂಟೆ ]

ಯೌವನಾ:—ಕೇಳಿದಿರೇನು, ಭೈರವಮ್ಮನವರೇ? ಆ ಜಯವಂತಿ ದೇವಿಯರು ಮೊನ್ನೆ ತಾನೇ ಐ. ಸೀ. ಎಸ್. ಪರೀಕ್ಷೆ ಪಾಸಾಗಿ ವಿಲಾಯಿತಿಯಿಂದ ಬಂದಿರುವರಲ್ಲ! ಅವರಿಗೆ ಬೇಗನೇ ಲಗ್ನವಾಗುವುದಂತೆ. ಇಂದೇ ಬೆಳಿಗ್ಗೆ ಅವರು ವರನ ಪರೀಕ್ಷೆಯನ್ನು ಮಾಡಿ ಬಂದಿರುವರಂತೆ.

ಭೈರವಮ್ಮ:—(ಕಾಫಿಯನ್ನು ಕುಡಿಯುತ್ತ) ಆಗಿರಬಹುದು, ನಾನೂ ಹಾಗೇನೋ ಕೇಳಿರುವೆನು.— —ಅಮ್ಮಮ್ಮಾ, ಕಾಫಿಯು ವಿಪರೀತ ಸಿಹಿಯಾಗಿದೆ!

ಯೌವನಾ:—ಏನು, ವಿಪರೀತ ಸಿಹಿಯೇ?–ಒಯ್!–ಓಹೋಯ್!

(ಅಡಿಗೆಕೋಣೆಯಿಂದ ಯೌವನಾಬಾಯಿಯ ಗಂಡನು—ನರಸಯ್ಯನು—ಜಾಗ್ರತೆಯಿಂದ ಕೊಠಡಿಯೊಳಗೆ ಪ್ರವೇಶಿಸಿ ನಮ್ರತೆಯಿಂದ ತಲೆಬಾಗಿ ನಿಲ್ಲುವನು. ಅವನು ತನ್ನ ಮಾತುಗಳೆಲ್ಲವನ್ನೂ ವಿನಯದಿಂದಲೇ ಆಡುವನು.)

ಯೌವನಾ—ಭೈರವಮ್ಮನು ಹೇಳಿದುದನ್ನು ಕೇಳಿದ್ದೀಯಾ?

ನರಸಯ್ಯ:—ಇಲ್ಲ, ಕೇಳಲಿಲ್ಲ.

ಯೌವನಾ—ಕಾಫಿಯು ವಿಪರೀತ ಸಿಹಿಯಾಗಿದೆಯಂತೆ

ನರಸಯ್ಯ—(ಗಾಬರಿಯಿಂದ) ಸಿಹಿಯಾಗಿವೆಯೇ? . . . ನಾನು . . . ಕೈತಪ್ಪಿನಿಂದ . . . ಎರಡು ಸಾರಿ . . ಸಕ್ಕರೆಯನ್ನು ಹಾಕಿದ್ದಿರಬೇಕು.

ಯೌವನಾ:— ಕೈ ತಪ್ಪುವುದು ಹೇಗೆ, ಸ್ಮೃತಿ ಸರಿ ಇದ್ದರೆ? ಕಾಫಿಯು ಹಾಳಾದುದು ಒಂದು ಬೇಸರ; ವಸ್ತುಗಳ ದುರ್ವ್ಯಯವಾಗುವುದು ಮತ್ತೊಂದು ಬೇಸರ. ನಾನು ಬೆಳಗಿನಿಂದ ಸಾಯಂಕಾಲದ ವರೆಗೆ ದುಡಿದು ಸಂಪಾದಿಸಿದ ಹಣವೆಲ್ಲ ಈ ದುರ್ವ್ಯಯಕ್ಕೆ ಸಾಲದು. ಈಗಿನ ಕಾಲದ ಗಂಡಂದಿರಿಗೆ ಸ್ವಲ್ಪವಾದರೂ ತಿಳಿವೇ ಇಲ್ಲ. ಇಸ್ಪೀಟು ರಾಜನಂತೆ ಇಷ್ಟು ದೊಡ್ಡದಾಗಿ ಬೆಳೆದರೂ ಸರಿಯಾಗಿ ಕಾಫಿ ಮಾಡಲು ಬರುವುದಿಲ್ಲವೆಂದರೆ ಎಂತಹ ಹೇಸಿಕೆ! ನಿನ್ನನ್ನು ದೂಷಿಸಿ ಪ್ರಯೋಜನ ವಿಲ್ಲ. ನಿನ್ನ ತಂದೆಯು ನಿನ್ನನ್ನು ಪಂಜರದಲ್ಲಿದ್ದ ಗಿಣಿಯಂತೆ ಸಾಕಿದನು. ಅದರ ಪರಿಣಾಮವನ್ನು ನಾನೀಗ ಅನುಭವಿಸಬೇಕಾಗುತ್ತದೆ ಈಗೇನು ಮಾಡುವಿ? ಭೈರವಮ್ಮನ ಫಲಾಹಾರವು ವ್ಯರ್ಥವಾಯಿತು.

ಭೈರವಮ್ಮ:— ಅಂ, ಚಿಂತೆಯಿಲ್ಲ. ಫಲಾಹಾರವನ್ನು ಮಾಡಿಯೇ ಇಲ್ಲಿ ಬಂದದ್ದು.

ನರಸಯ್ಯ:— ಬೇಗನೇ ಇನ್ನೊಂದು ಸಾರಿ ಕಾಫಿಯನ್ನು ಮಾಡಿ ಕೊಡಲೇ? ಕುದಿಯುತ್ತಿರುವ ನೀರೂ ಉಂಟು

ಯೌವನಾ:— ಹೂಂ, ಹಾಗೆಯೇ ಮಾಡು— ಬೇಗ!

(ನರಸಯ್ಯನು ಒಳಗೆ ಹೋಗುವನು )

ಭೈರವಮ್ಮ:— ಎಲ್ಲಾ ಕಡೆಯಲ್ಲೂ ಇದೇ ಹಾಡು, ಯೌವನಾಬಾಯಿ ಯವರೇ! ನಮ್ಮಲ್ಲಿಯೂ ಇದೇ ಕೂಗು. ನನ್ನಾತನಿಗೆ ಅಡಿಗೆ ಮಾಡಲು ಬಾರದು, ಕಾಫಿ ಮಾಡಲು ಬಾರದು, ಯಾವುದನ್ನೂ ಮಾಡಲು ಬಾರದು. ಅದಕ್ಕೋಸ್ಕರವೇ ಒಬ್ಬ ಪರಿಚಾರಕನನ್ನು ಅಡಿಗೆ ಕೆಲಸಕ್ಕೆ ಇಟ್ಟುಕೊಳ್ಳಲೇ ಬೇಕಾಯಿತು. ನನ್ನಾತನು ಒಂದು ಕೆಲಸದಲ್ಲಿ ಹುಷಾರ್!— ಕಾದಂಬರಿ ಗಳನ್ನು ಓದುವುದರಲ್ಲಿ! ಈಗಂತೂ ಹೊಸತಾಗಿ ತೆಗೆದುಕೊಂಡ ಪಿಯಾನೂ ಇದೆ. ಇಡೀ ದಿನ ಮನೆಯಲ್ಲಿ ಗಾಯನವನ್ನು ಕೇಳಿ ಕೇಳಿ ಬೇಸರ ಬಂತು ಆಫೀಸಿಗಾಗಲಿ, ಕ್ಲಬ್ಬಿಗಾಗಲೀ ಮನೆಯಿಂದ ಎಂದು ಹೋಗೋ ಣವೆಂದೆನಿಸುತ್ತದೆ. ಇಂತಹ ವರ್ತನೆಯು ಗಂಡಂದಿರಿಗೆ ಶೋಭಿಸುವುದಿಲ್ಲ, ಅಲ್ಲವೇನು?

ಯೌವನಾ:— ಅದೇನೂ ನನಗೆ ತಿಳಿಯದು ಅಂತೂ ನನ್ನಾತನನ್ನು ತವರು ಮನೆಗೆ ಕಳುಹಿಸಬೇಕೆಂದು ನಿಶ್ಚೈಸಿರುವೆನು

ಭೈರವಮ್ಮ:— ನನ್ನಾತನೂ ಕೆಲವು ದಿನಗಳಿಂದ ತವರು ಮನೆಗೆ ಹೋಗಬೇಕೆಂದು ಹೇಳುತ್ತಿದ್ದಾನೆ ಹೋಗಲಿ; ಮನೆಯಲ್ಲಿ ಕೆಲವು ದಿನವಾದರೂ ಗಾಯನವಿಲ್ಲದೆ ಸುಖನಿದ್ರೆಯನ್ನು ಅನುಭವಿಸಬಹುದು

ಯೌವನಾ — ಓಹೋಯ್!

(ಒಳಗಿನಿಂದ –'ಆಯಿತು! ಬಂದೆ!' ಎಂದು ಕೇಳಿಬರುವುದು. ಕೂಡಲೇ ಚಹದಾನಿಯಲ್ಲಿ ಕಾಫಿಯನ್ನು ತೆಗೆದುಕೊಂಡು ನರಸಯ್ಯನು ಬರುವನು. ಅವರಿಬ್ಬರಿಗೆ ಕಾಫಿಯನ್ನು ಹಂಚಿ ನಮ್ರತೆಯಿಂದ ದೂರದಲ್ಲಿ ನಿಲ್ಲುವನು.)

ಭೈರವಮ್ಮ:—(ಹೊಸ ಕಾಫಿಯನ್ನು ಕುಡಿಯುತ್ತ) ಈ ಕಾಫಿಯಾದರೆ ಭೇಷ್ ಆಗಿದೆ. ಇಂತಹ ಕಾಫಿಯನ್ನು ನಮ್ಮ ಮನೆಯಲ್ಲಿ ಒಮ್ಮೆ ಕುಡಿಯಬೇಕೆಂದು ಆಸೆಯಾಗುತ್ತಿತ್ತು. ಆದರೆ ಅದಕ್ಕೆ ಅದೃಷ್ಟಬೇಕಲ್ಲವೇ?

ಯೌವನಾ:— ಅದೃಷ್ಟವಲ್ಲ, ಮಣ್ಣು. ಸರಿಯಾಗಿ ಮಾಡು ಎಂದರೆ ಮಾಡುವರು, ಇಲ್ಲದಿದ್ದರೆ ಇಲ್ಲ. ಇದೇನು? ಐದುವರೆ ಘಂಟೆ ಆಗಲಿಕ್ಕಾಯಿತು! ಜಯವಂತಿ ದೇವಿಯರೊಡನೆ ಅವರು ಮಾಡಿದ ವರನ ಪರೀಕ್ಷೆಯ ಫಲವು ಏನೆಂದು ತಿಳಿದುಕೊಳ್ಳಬೇಕು. ಅವರು ಇಷ್ಟು ಹೊತ್ತಿಗೆ ಕ್ಲಬ್ಬಿಗೆ ಬಂದಿರಬೇಕು. ಮಾತುಕತೆಯಿಂದ ಸಮಯ ಹೋದುದೇ ತಿಳಿಯಲಿಲ್ಲ. ಇನ್ನು ಕ್ಲಬ್ಬಿಗೆ ಹೊರಡೋಣವೇನು?

ಭೈರವಮ್ಮ:— ಅಡ್ಡಿಯಿಲ್ಲದೆ!

ಯೌವನಾ:— ಯಮುನಾ!— ಯಮುನಾ!

(ಮೋಟರ್ ಕಾರಿನ ಶೋಫರಳಾದ ಯಮುನೆಯು ಬರುವಳು.)

ಕಾರನ್ನು ಪೋರ್ಟಿಕೋವಿನಲ್ಲಿ ತಂದಿಡು ನಾಕಷ್ಟು ಪೆಟ್ರೋಲ್ ಉಂಟಲ್ಲವೇ?

ಯಮುನಾ:— ಉಂಟಮ್ಮಾ—

ಯೌವನಾ:— ಒಳ್ಳೇದು. ಇಂದು ಕ್ಲಬ್ಬಿಗೆ ನಾನೇ ಡ್ರೈವ್ ಮಾಡು

ತ್ತೇನೆ. ನೀನು ನಾಳೆ ಬೆಳಿಗ್ಗೆ ಆಫೀಸಿನ ಸಮಯಕ್ಕೆ ಸರಿಯಾಗಿ ಬಂದರೆ ಸಾಕು—

(ಯಮುನೆಯು ಸಲಾಮು ಮಾಡಿ ಹೋಗುವಳು.)

ಓಹೋಯ್! ಈ ಕಪ್ ಸೊಸರುಗಳನ್ನು ಒಳಗೆ ತೆಗೆದುಕೊಂಡು ಹೋಗಿಡು. ಒಡೆದು ಹೋದೀತು, ಜಾಗ್ರತೆ! ಅವು ಅಮೂಲ್ಯವಾದ ಚೀನಾ ದೇಶದ ಕಪ್ ಸೊಸರುಗಳು. ನಾನು ರಾತ್ರಿ ಒಂಬತ್ತುವರೆ ಘಂಟೆಗೆ ಸರಿಯಾಗಿ ಮನೆಗೆ ಬರುವೆನು. ಅಷ್ಟು ಹೊತ್ತಿಗೆ ಊಟ ಸಿದ್ಧವಿರಲಿ!

(ನರಸಯ್ಯನು ಏನೋ ಮಾತಾಡಲಿಕ್ಕೆ ಪ್ರಯತ್ನಿಸುವನು.)

ಏನು, ಏನು ಹೇಳಿದೆ? ಗಟ್ಟಿಯಾಗಿ ಹೇಳಬಹುದಲ್ಲವೇ?

ನರಸಯ್ಯ:—(ನಮ್ರತೆಯಿಂದ) ಇಂದು ನನ್ನನ್ನು ಸಿನೇಮಕ್ಕೆ ಕರಕೊಂಡು ಹೋಗುತ್ತೇನೆಂದು ಬೆಳಿಗ್ಗೆ ಮಾತು ಕೊಟ್ಟಿದ್ದೀರಲ್ಲ?

ಯೌವನಾ:—ಒಹೋ, ನೆನಪಾಯಿತು. ಆದರೆ ನಾಳೆ ಹೋದರಾಗಲಿಕ್ಕಿಲ್ಲವೇ?

ನರಸಯ್ಯ:—ಇಂದು ಆ ಚಿತ್ರದ ಕಡೆಯ ಪ್ರದರ್ಶನವಂತೆ. ಅದೂ ಅಲ್ಲದೆ ಇಂಡಿಯನ್ ಫಿಲ್ಮು; ಸರಿಯಾಗಿ ತಿಳಿಯುತ್ತದೆ. ಬಹಳ ಸೊಗಸಾದ ಚಿತ್ರವೆಂದು ನೆರೆಮನೆಯ ಮೋಹನನು ಹೇಳಿದ್ದನು. ಅದನ್ನು ನೋಡಬೇಕೆಂದು ಬಹಳ ಆಸೆಯಾಗುತ್ತದೆ.

ಯೌವನಾ:—ಹುಂ . . . . ಆದರೆ ರಾತ್ರಿ ಅಷ್ಟು ಬೇಗ ಊಟ ಸಿದ್ಧವಾಗಬಹುದೇನು?

ನರಸಯ್ಯ:—(ಸಂತೋಷದಿಂದ) ಈಗಾಗಲೇ ಅದು ಅರ್ಧ ಸಿದ್ಧವಾಗಿದೆ. ಒಂದು ಪಲ್ಯ ಮಾಡಲಿಕ್ಕೆ ಮಾತ್ರ ಬಾಕಿ ಉಂಟು. ಅನ್ನವು ಬೇಯುತ್ತದೆ—

ಯೌವನಾ—(ನಗುತ್ತ) ಈಗ ತಿಳಿಯಿತು, ನೀನು ಕಾಫಿಗೆ ಎರಡು ಸಾರಿ ಸಕ್ಕರೆ ಹಾಕಲಿಕ್ಕೆ ಹೇಗೆ ಬಂದಿ ಎಂದು

ನರಸಯ್ಯ:—ಕರಕೊಂಡು ಹೋಗುವಿರಲ್ಲವೇ?

ಯೌವನಾ:—ನೀನು ಇಷ್ಟೆಲ್ಲ ಸಿದ್ಧತೆಯನ್ನು ಮಾಡಿರುವಾಗ ನಾನು ಹೇಗೆ ಅಲ್ಲಗಳೆಯಲಿ?

(ನರಸಯ್ಯನು ಇದನ್ನು ಕೇಳುತ್ತಲೇ ಸಂತೋಷದಿಂದ ಒಳಗೆ ಹೋಗುವನು.)

ಭೈರವಮ್ಮ:—ಇದೇನು? ಯೌವನಾಬಾಯಿಯವರೇ, ನಿಮ್ಮ ಗಂಡ ನೊಡನೆ ನಿಮ್ಮ ವರ್ತನೆಯು ಅಷ್ಟು ಬಿರುಸಾದುದೆಂದು ಹೊರಗೆ ತೋರಿ ದರೂ ನಿಜವಾಗಿ ನೋಡಿದರೆ ನಿಮ್ಮ ಹೃದಯವು ಗಂಡಸರ ಹೃದಯದಂತೆ ಮೃದುವಾಗಿರುವುದು ಅಲ್ಲವೇನು!

ಯೌವನಾ:—ಎಷ್ಟಾದರೂ ಗಂಡನ ಮೇಲೆ ಪ್ರೀತಿ ಇಲ್ಲದೆ ಇರು ವುದೇ? ಹೊರಗಿನಲ್ಲಿ ಅಷ್ಟು ಬಿರುಸಾಗಿ ಮಾತಾಡಿದರೇನು? ಏಕಾಂತದಲ್ಲಿ ಪ್ರೇಮದಿಂದಲೇ ಮಾತನಾಡುವೆ. ಹಾಗೆ ಒಮ್ಮೊಮ್ಮೆ ಬಿರುಸಾಗಿ ಮಾತ ನಾಡದಿದ್ದರೆ ತಲೆಯ ಮೇಲೆ ಕೂತುಕೊಂಡಾನು. ಇರಲಿ. ಹೊತ್ತಾ ಯಿತು, ಬನ್ನಿ ಕ್ಲಬ್ಬಿಗೆ ಹೋಗೋಣ.

(ಇಬ್ಬರೂ ಒಬ್ಬರೊಬ್ಬರ ಭುಜದ ಮೇಲೆ ಕೈಯಿಟ್ಟು ಒಟ್ಟಿಗೆ ಹೋಗುವರು.)

---

# ಎರಡನೆಯ ದೃಶ್ಯ.

[ ಸ್ಥಳ:— ಮಂಗಳೂರು ಕೊಸ್ಮೊಪೊಲಿಟನ್ ಕ್ಲಬ್. ಕೆಲವು ಸ್ತ್ರೀಯರು ಅಲ್ಲಲ್ಲಿ ವಿರಾಮ ಕುರ್ಚಿಗಳ ಮೇಲೋ, ಸೋಫಗಳ ಮೇಲೋ, ಮಾತನಾಡುತ್ತಲೋ, ಒಬ್ಬರಿಗೊಬ್ಬರು ಹಾಸ್ಯದ ತುಣುಕು ಮಿಣುಕುಗಳನ್ನು ಹೇಳುತ್ತಲೋ, ಸುಮ್ಮನೆ ಬಡಾಯಿ ಕೊಚ್ಚಿಕೊಳ್ಳುತ್ತಲೋ ಇರುವರು ಇನ್ನೂ ಕೆಲವರು ರೀಡಿಂಗ್ ರೂಮಿನಲ್ಲಿ ಪೊಲಿಟಿಕ್ಸನ್ನೊ, ರಾಜಕೀಯ ವಿಷಯಗಳನ್ನೊ, ಸಮಾಜಸುಧಾರಣೆಯನ್ನೊ ಚರ್ಚಿಸುತ್ತಲೂ, ಪತ್ರಿಕೆಗಳನ್ನು ಓದುತ್ತಲೂ ಇರುವರು. ಪಕ್ಕದಲ್ಲಿರುವ ಇಸ್ಪೀಟು ಆಟಗಳ ಕೋಣೆಗಳಿಂದಲೂ ಬಿಲಿಯಾರ್ಡ್ಸ್ ರೂಮಿನಿಂದಲೂ ಆಗಾಗ್ಗೆ ಗಲಭೆಯ ಅಲೆಗಳು ಒಂದರ ಮೇಲೆ ಮತ್ತೊಂದು ಬರುತ್ತಲೇ ಇವೆ

ಕ್ಲಬ್ಬಿನ ಪರಿಚಾರಿಕೆಯರು ಮೆಂಬರರಿಗೆ ಅವರು ಕೇಳಿದ ಹಾಗೆ ಸೋಡಾ ಲಿಮ್ನೇಡನ್ನೊ, ಕಾಫಿ ತಿಂಡಿಯನ್ನೊ, ಸಿಗರೇಟು ಚುಟ್ಟಗಳನ್ನೊ ಕೊಡುವುದಕ್ಕಾಗಿ ಕ್ಲಬ್ಬಿನೊಳಗೆ ಸುಳಿದಾಡುತ್ತಾ ಇರುತ್ತಾರೆ.

ರೀಡಿಂಗ್ ರೂಮಿನ ಒಂದು ಕಡೆಯಲ್ಲಿ ಯೌವನಾಬಾಯಿಯೂ ಭೈರವಮ್ಮನೂ ಐ ಸಿ. ಎಸ್. ಆಗಿ ಸೀಮೆಯಿಂದ ಬಂದ ಜಯವಂತಿದೇವಿಯನ್ನು ಸುತ್ತುಗಟ್ಟಿ ಅವಳೊಡನೆ ಮಾತುಕಥೆಗಳನ್ನು ಆಡುತ್ತಿರುವರು. ಭೈರವಮ್ಮನು ಆಗಾಗ್ಗೆ ಒಂದು ದೊಡ್ಡ ಚುಟ್ಟವನ್ನು ಸೇದುತ್ತಾ ಇರುತ್ತಾಳೆ. ಯೌವನಾಬಾಯಿಯು ಕ್ಲಬ್ಬಿನ ಪರಿಚಾರಿಕೆಯು ತನ್ನ ಹತ್ತಿರವಿಟ್ಟ ಗ್ಲಾಸಿನಿಂದ ಹತ್ತು ಮಿನಿಟಿಗೊಮ್ಮೆ ಅಲ್ಪ ಸ್ವಲ್ಪ ಲಿಮ್ನೇಡನ್ನು ಚೀಪುತ್ತಾ ಇದ್ದಾಳೆ. ಜಯವಂತಿದೇವಿಯ ಕೈಯಲ್ಲಿ ಒಂದು ವಾರ್ತಾ ಪತ್ರಿಕೆ ಇದೆ.

ಸಮಯ ಅದೇ ಸಂಜೆ. ಆರು ಘಂಟೆಗೆ ನಲುವತ್ತು ಮಿನಿಟುಗಳಿವೆ.]

ಭೈರವಮ್ಮ—ಪಂಜಾಬೀ! . . . ಪಂಜಾಬೀ! . . . . . ಈ ಪರಿಚಾರಿಕೆಯರಿಗೆ ಕಿವಿಯೋ ಕೇಳುವುದಿಲ್ಲ . . . . . . ಪಂಜಾಬೀ!

(ಕ್ಲಬ್ಬಿನ ಯಾವುದೋ ಒಂದು ಮೂಲೆಯಿಂದ 'ಬಂದೆ' ಬಂದೆ'' ಎಂಬ ಸ್ವರವು ಕೇಳಿಬರುವುದು.)

ಭೈರವಮ್ಮ:—(ಸ್ವಲ್ಪ ಹೊತ್ತಿನ ಅನಂತರ) ಪಂ. . . ಜಾ . . ಬೀಽಽ!

ಪಂಜಾಬಿ:—(ಓಡಿ ಬರುತ್ತ) ಬಂದೆ' ಬಂದೆ! ಬಾಯಿಸಾಹೇಬರಿಗೆ ಏನು ಬೇಕು?

ಭೈರವಮ್ಮ:—ನನ್ನ ಚುಟ್ಟವು ನಂದಿಹೋಗಿ ಎಷ್ಟೋ ಸಮಯವಾಯಿತು. ಒಂದು ಬೆಂಕಿಕಡ್ಡಿಯನ್ನು ಕೊಡು

(ಭೈರವಮ್ಮನು ಬಾಯೊಳಗೆ ಚುಟ್ಟವನ್ನು ಹಿಡಿದುಕೊಂಡು ಮುಖವನ್ನು ಮೇಲಕ್ಕೆತ್ತುವಳು. ಪಂಜಾಬಿಯು ಒಂದು ಬೆಂಕಿಕಡ್ಡಿಯನ್ನು ಹೊತ್ತಿಸಿ ಚುಟ್ಟಕ್ಕೆ ಹಿಡಿಯುವಳು.)

ಯೌವನಾ:—ಜಯವಂತಿದೇವಿಯರೇ, ಏನೋ ನಿಮ್ಮ ಹತ್ತಿರ ಕೇಳಬೇಕೆಂದಿದ್ದೆ, ಮರೆತುಹೋಯಿತು. (ಲಿಮ್ನೇಡು ಗ್ಲಾಸನ್ನು ಒಮ್ಮೆ ಚೀಪುವಳು.)

ಭೈರವಮ್ಮ:—ನಾನು ಹೇಳಲಿಕ್ಕೆ ಹೋದುದೇನೆಂದರೆ—

ಯೌವನಾ:—ಒಹೋ, ನೆನಪಾಯಿತು! ಜಯವಂತಿದೇವಿಯರೇ, ನಿಮ್ಮ ವರಪರೀಕ್ಷೆ ಮುಗಿಯಿತೇನು? ಹುಡುಗನು ಹೇಗಿದ್ದಾನೆ?

ಜಯವಂತಿ:—ಹೇಗೆಂದರೆ? ಹುಡುಗನ ಹಾಗೇ ಇದ್ದಾನೆ. ಈಗ ತಾನೆ ಬಿ. ಎ., ಡಿಗ್ರಿಯನ್ನು ಸಂಪಾದಿಸಿರುತ್ತಾನೆ.

ಭೈರವಮ್ಮ:—(ಬಾಯಿಂದ ಹೊಗೆಯನ್ನು ಬಿಟ್ಟು) ಅಬ್ಬಬ್ಬ! ಇಷ್ಟು ಕಲಿತ ಗಂಡನೇಕಪ್ಪ! ನಿಮ್ಮ ತಲೆಯ ಮೇಲೆ ಕೂತುಕೊಂಡಾನು, ತಲೆಯ ಮೇಲೆ!

ಜಯವಂತಿ:—(ನಗುತ್ತಾ) ತಲೆಯ ಮೇಲೆ ಕೂತುಕೊಂಡರೆ ಹೊತ್ತರಾಯಿತು. ಅವನನ್ನು ಲಗ್ನವಾದ ಮೇಲೂ ಕಲಿಸಬೇಕೆಂದಿದ್ದೇನೆ.

(ದೂರದಿಂದ ಈ ಮಾತುಗಳನ್ನು ಕೇಳುತ್ತಿದ್ದ ಪದ್ಮಾಬಾಯಿಯೂ ನವಿಲಮ್ಮನೂ ಹತ್ತಿರ ಬರುವರು.)

ಪದ್ಮಾ:—ಇದೇನು, ಜಯವಂತಿದೇವಿಯರೇ, ಲಗ್ನವಾದ ಮೇಲೂ ಹುಡುಗನಿಗೆ ಕಲಿಸಬೇಕೆಂದಿರುವಿರೇ? ಹಾಗೆ ಮಾಡಿದರೆ ಮನೆಗೆಲಸವನ್ನು ಮಾಡುವವರಾರು? ನೀವು ಆಫೀಸಿನಲ್ಲಾದರೆ ಅವನು ಕೊಲೇಜಿನಲ್ಲಿ!

ಜಯವಂತಿ:—ಗಂಡಸರು ಬರೇ ಮನೆಗೆಲಸ ಮಾಡುವುದಕ್ಕೇನು?

ನವಿಲಮ್ಮ:—ಮತ್ತೇನು? ನಮ್ಮ ಹಾಗೆ ಚಾಕರಿಮಾಡಿ ಅವರು ಹಣಗಳಿಸಬೇಕೇ?

ಭೈರವಮ್ಮ:—ಜಯವಂತಿದೇವಿಯರೇ, ನಾನು ಒಂದು ಮಾತನ್ನು ಹೇಳುತ್ತೇನೆ. ಕೇಳುವಿರಾದರೆ ಕೇಳಿ. ಮದುವೆಯಾದ ಹುಡುಗರನ್ನು ಹುಡುಗಿಯರಿದ್ದೆಡೆಗೆ ಕಳುಹಿಸುವುದು ಒಳ್ಳಿತಲ್ಲ. ನೀವು ಆ ಅನ್ನಪೂರ್ಣೆಯವರ ಅನುಭವವನ್ನು ಕೇಳಲಿಲ್ಲವೇ? ಅವರೂ ನೀವು ಮಾಡಲಿಕ್ಕೆ ಎಣಿಸಿದಂತೆ ತಮ್ಮ ಗಂಡನನ್ನು ಮದುವೆಯಾದ ಮೇಲೂ ಕೊಲೇಜಿಗೆ ಶಿಕ್ಷಣಕ್ಕೆಂದು ಕಳುಹಿಸಿದರು. ಸುತ್ತುಮುತ್ತಲೂ ಪ್ರಾಯಭರಿತರಾದ ಹುಡುಗಿಯರಿದ್ದಾಗ . . . . . . . .

ಜಯವಂತಿ:—(ಬೇಸತ್ತು) ಹಾಗಲ್ಲರೀ! ಹುಡುಗರೀಗ ಖಾಸಗಿಯಾಗಿ ಪರೀಕ್ಷೆಗೆ ಕೂತುಕೊಳ್ಳಬಹುದಲ್ಲವೇ? ಎಮ್. ಏ. ಪರೀಕ್ಷೆಗೆ ಕೂತುಕೊಳ್ಳುವಂತೆ ಅವನಿಗೆ ನಾನೇ ಕಲಿಸಬೇಕೆಂದಿರುವೆನು.

ನವಿಲಮ್ಮ:—ಚಲೋದಾಯಿತು! ಈಗೇನೋ ನೀವು ಅದನ್ನು ಹೇಳುವಿರಿ. ಆದರೆ ಮತ್ತೆ ತಿಳಿದೀತು, ನಿಮ್ಮ ಕೆಲಸದ ಗಡಿಬಿಡಿಯಲ್ಲಿ ಅದು ಸಾಧ್ಯವಾದೀತೋ ಇಲ್ಲವೆಂದು. ಆದಿರಲಿ. ನೀವೆಷ್ಟು ವಧೂದಕ್ಷಿಣೆಯನ್ನು ತೆಗೆದುಕೊಳ್ಳಬೇಕೆಂದು ನಿಶ್ಚಯಿಸಿರುವಿರಿ?

ಜಯವಂತಿ:—(ಪ್ರಶ್ನೆಯನ್ನು ಕೇಳದಂತೆಯೇ ನಟಿಸುವಳು.)

ಪದ್ಮಾ:—ಪಾಪ! ಹುಡುಗನ ಕಡೆಯವರು ಏನು ಕೊಟ್ಟಾರು? ಹುಡುಗನಿಗೆ ತಾಯಿಯೂ ಇಲ್ಲವಂತೆ, ತಂದೆಯೂ ಇಲ್ಲವಂತೆ. ಮುದುಕ ಅಜ್ಜನೊಬ್ಬನು ಮಾತ್ರ ಇರುವನಂತೆ.

ಯೌವನಾ:—ಜಯವಂತಿದೇವಿಯರೇ, ಧನದ ರಾಶಿಯಲ್ಲೇ ಕುಳಿತಿರುವ ಎಷ್ಟೋ ಹುಡುಗರಿದ್ದಾಗ, ಒಂದಿಷ್ಟು ವಧೂದಕ್ಷಿಣೆಯನ್ನು ಕೂಡ ತರಲಾರದಂತಹ ಈ ಹುಡುಗನನ್ನೇ ಏಕೆ ವರಿಸಬೇಕೆಂದಿರುವಿರಿ?

ಜಯವಂತಿ:—(ಒತ್ತರದಿಂದ) ಯೌವನಾಬಾಯಿಯವರೇ, ನಾನು ವರಿಸುವುದು ಹುಡುಗನನ್ನು, ಅವನು ತರಬಹುದಾದ ವಧೂದಕ್ಷಿಣೆಯನ್ನಲ್ಲ.

ಪದ್ಮಾ:—ಅದೊಂದು ಹೌದು, ಯೌವನಾ, ಹುಡುಗನನ್ನು ನೀನು ನೋಡಿಲ್ಲವೆಂದು ಕಾಣುತ್ತದೆ. ಹಣದ ಅಭಾವವೊಂದಲ್ಲದೆ ಹುಡುಗನಲ್ಲಿ

ಮತ್ತಾವ ಊನತ್ವವೂ ತೆಗೆಯಲಿಕ್ಕೆ ಇಲ್ಲ. ಈಗಿನ ಕಾಲದ ಇತರ ಹುಡುಗರಂತೆ ಇಲ್ಲ. ನೋಡಲಿಕ್ಕೂ ಬಹಳ ಸುರೇಖನಾಗಿದ್ದಾನೆ.

ಭೈರವಮ್ಮ:—ಒಹೋ, ಹಾಗೋ? ಹಾಗಾದರೆ ಚಿಂತೆ ಇಲ್ಲ.

ನವಿಲಮ್ಮ:—ಗಂಡನನ್ನು ಮನೆಗೆ ಕರಕೊಂಡು ಬರುವಾಗ ಅವನಿಗೇನು ಹೆಸರನ್ನು ಇಡಲು ಯೋಚಿಸಿರುವಿರಿ? . . . . . . . ಜಯವಂತಿ ದೇವಿಯರೇ, ನಾನು ಕೇಳಿದುದಕ್ಕೆ ಸಿಟ್ಟು ಬಂತೇ?

ಜಯವಂತಿ:—ಬಾರದೇನು? ನೀವು ನನಗೆ ಕೇಳುವ ಪ್ರಶ್ನೆಗಳನ್ನು ನೋಡಿದರೆ ನಾನಾವುದೋ ಒಂದು ಅಪರಾಧವನ್ನು ಮಾಡಿದುದಕ್ಕಾಗಿ ಕೋರ್ಟಿನ ಮುಂದೆ ವಿಚಾರಣೆಗೆ ಒಳಗಾಗಿದ್ದೇನೋ ಎಂಬಂತೆ ಕಾಣುತ್ತದೆ.

ಪದ್ಮಾ:—ಸಿಟ್ಟುಮಾಡಬೇಡಿ, ಜಯವಂತಿದೇವಿಯರೇ. ಎಷ್ಟಾದರೂ ಕ್ಲಬ್ಬಿನಲ್ಲಿ ಆಡುವ ಮಾತುಗಳಲ್ಲವೇ?

ಜಯವಂತಿ:—(ಫಕ್ಕನೆ ನಗುತ್ತ) ತಪ್ಪಾಯಿತು, ಕ್ಷಮಿಸಿರಿ. ಫಕ್ಕನೆ ನನ್ನನ್ನೇ ನಾನು ಮರೆತೆನು. ನವಿಲಮ್ಮನವರೇ, ನೀವು ಕೇಳಿದ ಪ್ರಶ್ನೆಗೆ ಉತ್ತರ ಕೊಡುವೆನು. ಮನೋಹರನೆಂದು ಕರೆಯಬೇಕೆಂದಿರುವೆ.

ಭೈರವಮ್ಮ:—ಚಲೋದಾದ ಹೆಸರು. ಆದರೂ ನನ್ನ ಗಂಡನಿಗೆ ನಾನಿಟ್ಟ ಹೆಸರಿನಷ್ಟು ಚಲೋದಲ್ಲ.

ಜಯವಂತಿ:—(ನಗುತ್ತ) ಅದಾವುದು, ಭೈರವಮ್ಮನವರೇ, ಅಷ್ಟು ಚಲೋದಾದ ಹೆಸರು?

ಯಾವನಾ:—ಪ್ರಭಾತನೆಂದು.

ಭೈರವಮ್ಮ:—ನಾನು ನನ್ನ ಗಂಡನಿಗೆ ಆ ಹೆಸರನ್ನಿಟ್ಟದ್ದೇ ತಡ, ಆ ಮೇಲೆ ಮದುವೆಯಾದ ಅನೇಕ ಮಹಿಳೆಯರು ಆ ಹೆಸರಿನಿಂದಲೇ ತಮ್ಮ ಗಂಡಂದಿರನ್ನು ಕರೆಯುತ್ತಿದ್ದಾರೆ.

ಯಾವನಾ:—ಒಂದೇ ಹೆಸರಿನಲ್ಲೇನುಂಟು?

ನವಿಲಮ್ಮ:— ಹೌದು, ನಿನ್ನ ಗಂಡನಿಗೆ ನಿನ್ನ ತಾಯಿಯು 'ನರಸಯ್ಯ' ನೆಂದು ಹೆಸರನ್ನಿಟ್ಟದ್ದುದರಿಂದ ನೀನು ಹಾಗೆ ಹೇಳುತ್ತೀ!

(ಎಲ್ಲರೂ ಗಟ್ಟಿಯಾಗಿ ನಗುವರು. ಯೌವನೆಯ ಮುಖವು ಸಣ್ಣದಾಗುವುದು.)

ಪದ್ಮಾ:— ಆದಿರಲಿ. ನೀವು ಈ ಹೊತ್ತಿನ ಟೈಮ್ಸ್ ಓದಿದ್ದಿರೇನು? 'Page for Men' (ಗಂಡಸರಿಗೋಸ್ಕರ ಬರೆದ ಪುಟ) ಇದ್ದ ಕಡೆ ನೋಡಿರಿ ಬಹಳ ಸೋಜಿಗದ ನ್ಯೂಸ್ ಇದೆ. ಜರ್ಮನಿಯಲ್ಲಿ ಗಂಡಸರು ಮೋಟರ್ ಬೈಕಿನಲ್ಲಿ ಕುಳಿತುಕೊಂಡು ಸವಾರಿಮಾಡಲಿಕ್ಕೆ ಕಲಿಯುತ್ತಾರಂತೆ! ರಶ್ಯಿಯಾದಲ್ಲಿ ಗಂಡಸರು ಗಡ್ಡ ಮತ್ತು ಮೀಸೆಯನ್ನು ಬೋಳಿಸುವುದಕ್ಕೆ ಪ್ರಾರಂಭಿಸಿದ್ದಾರಂತೆ! ಇಂಗ್ಲೆಂಡಿನಲ್ಲಿ ಗಂಡಸರು ಕ್ರಿಕೆಟ್ ಆಡಲಿಕ್ಕೆ ಕಲಿಯುತ್ತಾರಂತೆ!!

ಯೌವನಾ:— ಮುಗಿಯಿತೇನು?

ಪದ್ಮಾ:— ಇಲ್ಲ! ಜಪಾನು ದೇಶದಲ್ಲಿ ಐದು ನೂರು ಗಂಡಸರನ್ನು ಪೋಲೀಸು ಕೋನ್ಸಟೇಬಲರಾಗಿ ನೇಮಿಸಿದ್ದಾರಂತೆ!

ಭೈರವಮ್ಮ:— ಎಲ್ಲಾ ನವೀನ ವರ್ತನೆಯಪ್ಪ! ನಾನು ಯಾವಾಗಲೂ ಹೇಳುತ್ತಿರುವೆನಲ್ಲ, ಇದೆಲ್ಲ ಈಗಿನ ಶಿಕ್ಷಣದ ಪರಿಣಾಮವೆಂದು!

ನವಿಲಮ್ಮ:— ಹುಂ, ಹುಂ. ಹಾಗೆಲ್ಲ ಹೇಳಬೇಡಿ. ನಮ್ಮ ಜಯವಂತಿದೇವಿಯರಿಗೆ ಸಿಟ್ಟು ಬಂದೀತು. ಅವರು ಬೇಗನೇ ಶಿಕ್ಷಿತ ಹುಡುಗನೊಬ್ಬನನ್ನು ಮದುವೆಯಾಗಲಿಕ್ಕಿರುವರು, ಮರೆಯಬೇಡಿ!

ಜಯವಂತಿ:— ಏನು ನವಿಲಮ್ಮ, ಎಷ್ಟರ ವರೆಗೆ ನಿಮ್ಮ ಪರಿಹಾಸ್ಯವು! ಪದ್ಮಾಬಾಯಮ್ಮನವರೇ ನಿಮ್ಮ ನ್ಯೂಸಿನ ಬೊಗಸೆಯು ಬರಿದಾಯಿತೇನು?

ಪದ್ಮಾ:— (ಪತ್ರಿಕೆಯನ್ನು ಮುಂದಕ್ಕೆ ಸರಿಸಿ) ಇಲ್ಲ, ಇನ್ನೂ ಇದೆ! ಇಲ್ಲಿ ನೋಡಿ. ರಶ್ಮೀಕಾಂತನೆಂಬೊಬ್ಬ ಬ್ರಾಹ್ಮಣ ವಿಧುರನು— ಬೆಂಗಳೂರಿನವನು— ಪುನರ್ವಿವಾಹವನ್ನು ಮಾಡಿಕೊಂಡಿರುವನಂತೆ!—

ಭೈರವಮ್ಮ:— ಬೆಂಕಿ ಹಾಕಿ, ಈ ನವಸುಧಾರಣೆಗೆ!

ಯೌವನಾ:—ಪುನರ್ವಿವಾಹವೇ? ಎಂತಹ ಅತ್ಯಾಚಾರ! ನಾನಿದನ್ನು ನಂಬಲಾರೆ.

ಪದ್ಮಾ:—ನಾನು ಸುಳ್ಳಾಡುವೆನೇ? ಪತ್ರಿಕೆಯನ್ನು ಓದಬಹುದಲ್ಲ!

ನವಿಲಮ್ಮ:—ಈಗಿನ ಕಾಲದ ಗಂಡಸರು ಏನು ಮಾಡಿಯಾರು, ಏನು ಮಾಡಲಿಕ್ಕಿಲ್ಲವೆಂದು ಹೇಳುವುದೇ ಕಷ್ಟವಾಗಿದೆ.

ಜಯವಂತಿ:—(ರಭಸದಿಂದ) ಸುಮ್ಮನೆ ನೀವು ಏನೆಲ್ಲ ಅರ್ಥವಿಲ್ಲದ ಮಾತುಗಳನ್ನಾಡುವಿರಿ? ಕೇಳೋಣ, ಗಂಡಸರು ಪುನರ್ವಿವಾಹವನ್ನು ಏಕೆ ಮಾಡಿಕೊಳ್ಳಬಾರದು? ಹೆಂಗಸರಾದ ನಾವು ಬೇಕಾದಷ್ಟು ಸಾರಿ ವಿವಾಹವನ್ನು ಮಾಡಿಕೊಳ್ಳಬಹುದಂತೆ. ಮೊದಲನೆಯ ಗಂಡನು ತೀರಿ ಹೋದ ಮರುದಿನವೇ ಎರಡನೆಯ ಗಂಡನ ಆಲೋಚನೆಯನ್ನು ಮಾಡಬಹುದಂತೆ. ಎರಡನೆಯ ಗಂಡನು ತೀರಿಹೋದರೆ ಮೂರನೆಯ ಗಂಡನನ್ನೂ ಮಾಡಿಕೊಳ್ಳಬಹುದಂತೆ. ಮುಪ್ಪಿನಿಂದ ಶರೀರವೆಲ್ಲ ಒಣಗಿದ ಖರ್ಜೂರದಂತೆ ಆದರೂ ವಿವಾಹವನ್ನು ಮಾಡಿಕೊಳ್ಳಬಹುದಂತೆ. ಸ್ಮಶಾನ ಯಾತ್ರೆಗೆ ಸಿದ್ಧಳಾದವಳಿಗೆ ಕೂಡ ವಿವಾಹವು ಸಲ್ಲುವುದಂತೆ. ಆದರೆ ಅದೇ ನ್ಯಾಯವನ್ನು ಅಬಲರಾದ ಗಂಡಸರ ವಿಷಯದಲ್ಲಿ ಮಾತ್ರ ನಾವೇಕೆ ಉಪಯೋಗಿಸುವುದಿಲ್ಲ? ಅವರು ಮಾತ್ರ ತಮ್ಮ ಹಂಡಿರನ್ನು ಕಳೆದುಕೊಂಡ ಕೂಡಲೇ—ಅವರೆಷ್ಟು ಯೌವನಸ್ಥರಾದರೂ ಕೂಡ—ಮರಣ ಪರ್ಯಂತ ತಮ್ಮ ಜೀವನವನ್ನು ದುಃಖದ ಸಾಗರದಲ್ಲಿ ಮುಳುಗಿಸಿರಬೇಕೇ? ಇದು ಯಾವ ಮುರ್ಖಾಳರ ನ್ಯಾಯ?

ಭೈರವಮ್ಮ:—ಇದೇನಮ್ಮ, ಜಯವಂತಿದೇವಿಯರೇ, ನೀವು ಪ್ರತ್ಯೇಕ ಒಂದು ವೇದವನ್ನು ನಿರ್ಮಿಸುವಿರೇನು?

ಜಯವಂತಿ:—ಪ್ರತ್ಯೇಕ ವೇದವನ್ನೇಕೆ ನಿರ್ಮಿಸಬೇಕು? ಇದ್ದ ವೇದವನ್ನೇ ಸರಿಯಾಗಿ ತಿಳಿಯಲು ನಮಗೆ ಮತಿಯಿಲ್ಲ!—ನಾನು ಹೇಳುವುದಾದರೆ, ಹೆಂಗಸರಿಗೂ ಗಂಡಸರಿಗೂ ಎಲ್ಲ ವಿಷಯಗಳಲ್ಲಿ ಸರಿಸಮಾನವಾದ ಹಕ್ಕುಗಳಿರಲೇ ಬೇಕು.

ನವಿಲವ್ಮ:—ಜಯವಂತಿ ದೇವಿಯರೇ, ಸ್ವಲ್ಪ ವಿಚಾರಿಸಿ ನೋಡಿ. ಸೃಷ್ಟಿಯೇ ಗಂಡಸರನ್ನು ಅಷ್ಟು ಅಬಲರಾಗಿ ಮಾಡಿರುವಾಗ ಗಂಡಸರಿಗೆ ಹೆಂಗಸರೊಡನೆ ಸರಿಸಮಾನತೆಯು ಎಲ್ಲಿಂದ ಬರಬೇಕು? ಸುಮ್ಮನೆ ನಿಮ್ಮ ಮನಸ್ಸಿನ ಉದಾರತ್ವದಿಂದ ಕೈಲಾಗದ ಕೆಲಸಕ್ಕೆ ಕೈಹಚ್ಚಬೇಡಿ. ನೀವಿನ್ನೂ ಎಳೇ ಪ್ರಾಯದವರು. ಐ. ಸಿ ಎಸ್. ಪರೀಕ್ಷೆ ಪಾಸಾದರೆ ಸಾಲದು ಲೋಕದ ಅನುಭವವೂ ಬೇಕು. ಕಾಲಿನ ಜೋಡು ಕಾಲಿಗೇ ಇರಬೇಕಲ್ಲದೆ ತಲೆಯಮೇಲಿಟ್ಟುಕೊಂಡರೆ ಪ್ರಯೋಜನವೇನು?

ಜಯವಂತಿ.—(ಅಸಹ್ಯತೆಯಿಂದ ಮುಖ ತಿರುಗಿಸುವಳು.)

ಪದ್ಮಾ:—(ಬಿಲಿಯಾರ್ಡ್ಸ್ ಆಡುವ ಕ್ಯೂವನ್ನು ತೆಗೆದುಕೊಂಡು ಬಂದು) ನಿಮ್ಮ ವಾದವಿವಾದದಿಂದ ನನಗೆ ಬೇಸರ ಬಂತು. ನನ್ನೊಡನೆ ಒಂದು ಗೇಮು ಬಿಲಿಯಾರ್ಡ್ಸ್ ಆಡಲಿಕ್ಕೆ ಯಾರು ಬರುತ್ತಾರೆ?

ನವಿಲಮ್ಮ:—ನಾನು ಈ ಹೊತ್ತು ಒಂದು ರಬ್ಬರ್ ಬ್ರಿಜ್ ಆಡಬೇಕೆಂದಿದ್ದೇನೆ. (ಎಂದು ಬ್ರಿಜ್ ಆಟದ ಕೊರಡಿಗೆ ಹೋಗಲು ಸಿದ್ಧಳಾಗುವಳು.)

ಭೈರವಮ್ಮ:—ಬ್ರಿಜ್ ಆಡುವುದಾದರೆ ನಾನೂ ಬರುವೆನು (ಎಂದು ಏಳುವಳು.)

ಪದ್ಮಾ:—ಏನು, ಬಿಲಿಯಾರ್ಡ್ಸ್ ಆಡಲು ಯಾರೂ ಬರುವುದಿಲ್ಲವೇ? ಜಯವಂತಿ ದೇವಿಯರೇ, ನೀವಾದರೂ ಬನ್ನಿ.

ಜಯವಂತಿ:—ನನಗಿಂದು ಆಡಲು ಮನಸ್ಸಿಲ್ಲ. (ಕ್ಲಬ್ಬಿನಿಂದ ಹೊರಟು ಹೋಗುವಳು)

ಪದ್ಮಾ:—ಯೌವನಾ, ನೀನು?

ಯೌವನಾ:—ಫಿಫ್ಟಿ ಅಪ್ಪ್ ಗೇಮಾದರೆ ಬರುವೆನು. ಹೆಚ್ಚು ಹೊತ್ತು ನಿಲ್ಲಲು ಆಗುವುದಿಲ್ಲ.

ಪದ್ಮಾ:—ಫಿಫ್ಟಿ ಅಪ್ಪ್ ಏನು ಆಡುವುದು ಮಣ್ಣು? ಆಡುವುದಾದರೆ ಹಂಡ್ರೆಡ್ ಅಪ್ ಆಡಬೇಕು. ಇವತ್ತೇನು ನಿನಗೆ ಮನೆಗೆ ಹೋಗಲಿಕ್ಕೇ ಅಷ್ಟೊಂದು ಆತುರ?

ಯೌವನಾ:—ಇಂದು ರಾತ್ರಿ ನನ್ನಾತನನ್ನು ಸಿನೇಮಾಕ್ಕೆ ಕರಕೊಂಡು ಹೋಗುವೆನೆಂದು ಹೇಳಿದ್ದೇನೆ. ಏನೋ ಒಂದು ಇಂಡಿಯನ್ ಫಿಲ್ಮ ಬಂದದೆಯಂತೆ. ಅವನಿಗೆ ಇಂಗ್ಲಿಷು ಫಿಲ್ಮುಗಳು ತಲೆಯೊಳಗೆ ಹೊಗುವುದಿಲ್ಲವಂತೆ.

ಪದ್ಮಾ:—ಅಷ್ಟೇನೋ! (ರಿಸ್ಟ ವಾಚನ್ನು ನೋಡಿ) ಬರೇ ಏಳು ಘಂಟೆ ಆಗುತ್ತದೆಯಷ್ಟೇ. ಸಿನೇಮಾ ಶೋ ಒಂಭತ್ತುವರೆ ಘಂಟೆಗೆ ಪ್ರಾರಂಭವಾಗುವುದಲ್ಲವೇ?

ಯೌವನಾ:—ಆದರೂ ಬೇಗ ಹೋಗಬೇಕು. ನನ್ನಾತನು ಪೂರ್ವ ಪದ್ಧತಿಯನ್ನನುಸರಿಸುವವನು. ನಾನು ಮೊದಲು ಊಟಮಾಡಿ ಆ ಮೇಲೆ ನನ್ನ ಎಂಜಲು ಬಟ್ಟಲಿನಲ್ಲಿ ಅವನು ಊಟಕ್ಕೆ ಕುಳಿತುಕೊಳ್ಳುವುದು.

(ಯೌವನಾಬಾಯಿಯು ಮಾತು ಮುಗಿಸುವಷ್ಟರೊಳಗೆ ಅವರಿದ್ದೆಡೆಗೆ ಕುಮುದಿನಿಯು ಬರುವಳು ಕುಮುದಿನಿಯು ೨೨ ವರ್ಷ ಪ್ರಾಯದ ಹುಡುಗಿಯು. ಕೈಯಲ್ಲಿ ಒಂದು ಬೆಡ್‌ಮಿಂಟನ್ ರೆಕೆಟ್ಟು ಇದೆ.)

ಪದ್ಮಾ:—(ಕುಮುದಿನಿಯನ್ನು ನೋಡಿ, ಅಸಹ್ಯತೆಯಿಂದ) ಇದೇನು ಕುಮುದಾ, ಗಂಡಸರು ಆಡುವ ಆಟವನ್ನು ಎಂದಿನಿಂದ ಆಡಲು ಕಲಿತಿರುವೆ?

ಕುಮುದಿನಿ:—ಇಸ್ಸಿಯಪ್ಪಾ, ಆ ಆಟವನ್ನು ನಾನು ಆಡುವೆನೇ? ನನ್ನ ಅಣ್ಣನಿಗೆಂದು ಇದನ್ನು ಈಗ ತಾನೇ ನಾನು ಬಾಳಿಯಮ್ಮನವರ ಶೋಪಿನಿಂದ ತೆಗೆದುಕೊಂಡದ್ದಾಗಿರುತ್ತದೆ.—ಇದೇನು ಯೌವನಾಬಾಯಿಯವರೇ, ಇಷ್ಟು ಬೇಗ ಮನೆಗೆ ಹೊರಡಲು ಸಿದ್ಧರಾದಿರೇನು?

ಪದ್ಮಾ:-ಗಂಡನನ್ನು ಇಂದು ರಾತ್ರಿ ಸಿನೇಮಾಕ್ಕೆ ಕರಕೊಂಡು ಹೋಗಬೇಕಂತೆ.

ಕುಮುದಿನಿ:—ಹಾಗೋ! ಹಾಗಾದರೆ ಹೋಗಿ ಬಿಡಮ್ಮ. ಇಲ್ಲದಿದ್ದರೆ ಅವನು ಕಣ್ಣೀರು ಸುರಿಸುತ್ತಾ ಕುಳಿತುಕೊಳ್ಳಬಹುದು.

ಯೌವನಾ:—ಸ್ವಲ್ಪ ತಾಳು, ಕುಮುದಿನಿ. ನಿನಗೂ ಒಂದು ಲಗ್ನವಾಗಲಿ ಆ ಮೇಲೆ ನಿನಗೂ ತಿಳಿಯುವುದು—ಸಂಸಾರವೇನೆಂದು. ಹೋಗುವೆನು. ಗುಡ್ ನೈಟ್!

ಪದ್ಮಾ
ಕುಮುದಿನಿ } ಗುಡ್ ನೈಟ್!

ಕುಮುದಿನಿ:—ಇದೇನು ಪದ್ಮಾಬಾಯಿಯವರೇ, ಬಿಲಿಯಾರ್ಡ್ಸ್ ಕ್ಯೂವನ್ನು ಹಿಡಿದುಕೊಂಡು ಯಾರ ತಲೆಯನ್ನು ಹೊಡೆದುಹಾಕಬೇಕೆಂದಿರುವಿರಿ?

ಪದ್ಮಾ:—ನನ್ನ ತಲೆಯನ್ನೇ ಹೊಡೆದುಕೊಳ್ಳೋಣವೇ ಎಂದೆನಿಸುತ್ತದೆ ನನ್ನೊಡನೆ ಒಂದು ಗೇಮ್ ಆಡಿರಿ ಎಂದು ಇಪ್ಪತ್ತು ಜನರ ಕಾಲನ್ನು ಹಿಡಿದೆನು. ಒಬ್ಬಳೂ ಸಮ್ಮತಿಸಲಿಲ್ಲ. ಎಲ್ಲರೂ ಆ ಹಾಳು ಬ್ರಿಜ್ಜಿನಲ್ಲಿ ದುಡ್ಡು ಮಾಡಲು ಹೋಗಿರುವರು.

ಕುಮುದಿನಿ — ನಾನಿದ್ದೇನಲ್ಲ, ಬನ್ನಿ ಆಡೋಣ.

(ಕುಮುದಿನಿಯೂ ಒಂದು ಕ್ಯೂವನ್ನು ಹಿಡಿದುಕೊಂಡು ಬರುವಳು. ಇಬ್ಬರೂ ಆಡಲಿಕ್ಕೆ ಪ್ರಾರಂಭಿಸುವರು. ಕಾಲು ಘಂಟೆಯ ಅನಂತರ ಭೈರವಮ್ಮ ಪುನಃ ಪ್ರವೇಶಿಸುವಳು.)

ಭೈರವಮ್ಮ:—ಏನು, ಸ್ಕೋರು ಹೇಗಿದೆ? ಸ್ಪಾಟ್ ಯಾರು? ಪದ್ಮಾಬಾಯಿಯವರೇ?

ಪದ್ಮಾ (ಆಡುತ್ತಾ) ಛೆ, ಅಲ್ಲ. ಕುಮುದಿನಿಯು ಸ್ಪಾಟ್, ನಾನು ಪ್ಲೈನ್.

ಕುಮುದಿನಿ: - (ನಗುತ್ತಾ) ಅದನ್ನು ಹೇಳಬೇಕಾದುದಿಲ್ಲವಷ್ಟೇ?

ಪದ್ಮಾ:—ಸಾಕು, ನಿನ್ನ ಪರಿಹಾಸ್ಯ. ಮೊದಲೇ ನನಗೆ ಗೇಮು ಇಲ್ಲ. ಇಂಥೇನೋ ನನಗಾಗಿದೆ. ಆಡಿದ ಶೊಟ್ ಒಂದೂ ಬರುವುದಿಲ್ಲ. ಒಂದಾದರೂ ಟೊಪ್ ಇನ್ ಒಫ್ ಬರುವುದಿಲ್ಲ. ಒಂದಾದರೂ ಬ್ರೇಕ್ ಇರಬೇಕೇ?. . . .ಇದೇನು ಕುಮುದಿನಿ, ನೀನು ಹಾಗೆ ಫ್ಲೂಕ್ ಮಾಡಬಹುದೇ? ಏನು ಫ್ಲೂಕಿನಿಂದಲೇ ಗೇಮನ್ನು ಮುಗಿಸಿಕೊಳ್ಳಬೇಕೆಂದಿರುವೆಯಾ?. . . .

(ಅವರು ಆಡುತ್ತಿರುವಾಗಲೇ ತೆರೆಯು ಬೀಳುವುದು.)

---

# ಮೂರನೆಯ ದೃಶ್ಯ

[ಸ್ಥಳ:— ಯೌವನಾ ಬಾಯಿಯ ಮನೆಯ ಜಗುಲಿ. ಹಾಸಿದ ಚಾಪೆಯ ಮೇಲೆ ನಾಲ್ಕೈದು ಮಂದಿ ಗಂಡಸರು ಎಲೆ ಅಡಿಕೆಯ ಹರಿವಾಣದ ಸುತ್ತಲೂ ಕುಳಿತುಕೊಂಡು ಮಾತು ಕಥೆಗಳನ್ನಾಡುತ್ತಿರುವರು ಅವರೆಲ್ಲರ ಪೋಷಾಕು ವಿಚಿತ್ರತರದ್ದಾಗಿರುತ್ತದೆ. ಅವರ ಕೋಟುಗಳೂ, ಧೋತರಗಳೂ, ಜುಬ್ಬಗಳೂ ನಾನಾ ತರದ ಬಣ್ಣಗಳಿಂದಲೂ, ಲೇಸಿನ ಅಂಚುಗಳಿಂದಲೂ, ಝುರಿಯ ಹೂವುಗಳಿಂದಲೂ ತುಂಬಿ ಕಣ್ಣಿಗೊಂದು ಹಬ್ಬವನ್ನು ಕೊಡುತ್ತಿವೆ. ಯೌವನಾಬಾಯಿಯ ಗಂಡನಾದ ನರಸಯ್ಯನು ಅವರಿಗೆಲ್ಲ ಆದರಾತಿಥ್ಯದ ಉಪಚಾರಗಳನ್ನು ಮಾಡುತ್ತಿರುವನು.

ಸಮಯ:—ಅದೇ ಸಂಜೆ, ಆರುವರೆ ಘಂಟೆ.]

ನರಸಯ್ಯ:—ಏನು, ಪ್ರಭಾತರಾಯರೇ, ಇಷ್ಟು ಬೇಗ ಎದ್ದಿರೇನು? ಇನ್ನೂ ಸ್ವಲ್ಪ ಹೊತ್ತು ಕೂತುಕೊಳ್ಳಬಹುದಲ್ಲವೇ? ಮನೆಯಲ್ಲಿ ಕೆಲಸದವನು ಇರುವನಲ್ಲವೇ?

ಪ್ರಭಾತ:—ಹೊತ್ತು ಮೀರಿತು. ಕೆಲಸದವನಿದ್ದರೇನು? ಮುಕ್ಕಾಲು ಪಾಸಿ ಕಲಸವು ನನ್ನ ಮೇಲೆಯೇ ಬಿದ್ದಿರುವುದು. ಭೂಷಣಕ್ಕೆಂದು ಮನೆಯಲ್ಲೊಬ್ಬ ಆಸಾಮಿ, ಅಷ್ಟೇ.

ನರಸಯ್ಯ:—ನೀವೇನೋ ಬೇಗನೆ ತವರುಮನೆಗೆ ಹೋಗಬೇಕೆಂದಿರುವಿರಂತೆ. ನಿಜವೇ?

ದಿನಕರ:—ಯಾರು, ಪ್ರಭಾತರಾಯರೇ? ಅಷ್ಟು ಆತುರವೇನು?

ಪ್ರಭಾತ.—ಆತುರವೇನು ಮಣ್ಣಿನದು? ಇಲ್ಲಿ ಕೆಲಸ ಮಾಡಿ ಮಾಡಿ ದೇಹಕ್ಕೆ ಸ್ವಲ್ಪ ಸೌಖ್ಯವಿಲ್ಲ. ಒಂದು ಹತ್ತು ದಿನ ಮಾತ್ರಕ್ಕೆ ತಂದೆಯಿದ್ದೆಡೆಗೆ ಹೋಗಿ ಸಿಲ್ಲೋಣವೆಂದೆನಿಸಿತು ಅದರೆ ಹೋಗಲಿಕ್ಕೆ ಸಂದರ್ಭವೇ ಈ ತನಕ ದೊರೆಯಲಿಲ್ಲ. ಯಾರಾದರೂ ಸ್ತ್ರೀ ಸಂಗಾತ ಸಿಕ್ಕಬೇಕಲ್ಲವೇ? ನಮ್ಮವರಿಗೇನೂ ಪುರ್ಸತು ಇಲ್ಲವಂತೆ.

ದಿನಕರ:—ನಮ್ಮ ಜಗರಾಯನ ಪತ್ನಿ ನಾಡದು ಬೆಳಿಗ್ಗೆ ನಿಮ್ಮ ತಂದೆಯ ಊರಿಗೆ ಹೋಗುವವರಿದ್ದಾರಲ್ಲ.

ಪ್ರಭಾತ:–ಹೌದು, ಅವರ ಸಂಗಡ ಕಳುಹಿಸಿಕೊಡುತ್ತೇನೆಂದು ನಮ್ಮವರು ವಚನವನ್ನಿತ್ತಿದ್ದಾರೆ. ಆದರೆ ಎಲ್ಲವೂ ಹೋದ ಮೇಲೆಯೇ ನಿಶ್ಚಯವು.

ಮೋಹನ:—ಪ್ರಭಾತರಾಯರೇ, ನೀವು ನಾಡದು ಬೆಳಿಗ್ಗೆ ಹೋಗುವುದಾದರೆ ಇಲ್ಲೊಂದು ಮದುವೆಯನ್ನು ನೋಡುವ ಸಂದರ್ಭವನ್ನು ನೀವು ಕಳೆದುಕೊಳ್ಳುವಿರಿ..

ಪ್ರಭಾತ:— ಯಾರ ಮದುವೆಯಪ್ಪ?

ಮೋಹನ — ಕದ್ರಿಯಲ್ಲಿರುವ ಲಕ್ಷ್ಮಣಜ್ಜನ ಪರಿಚಯವಿಲ್ಲವೇ?

ಪ್ರಭಾತ:— ಏನು ಲಕ್ಷ್ಮಣಜ್ಜನಿಗೆ ಮದುವೆಯೇ?

ನರಸಯ್ಯ:—(ಕಿವಿಗಳನ್ನು ತನ್ನ ಬೆರಳುಗಳಿಂದ ಮುಚ್ಚಿಕೊಂಡು) ಎಂತಹ ಭಯಂಕರವಾದ ಪರಿಹಾಸ್ಯವಪ್ಪಾ, ನಿಮ್ಮದು!

ಮೋಹನ:—ಲಕ್ಷ್ಮಣಜ್ಜನ ಮೊಮ್ಮಗ ಬಲರಾಮನಿದ್ದಾನಲ್ಲ— ಅವನೇ, ಬಿ ಏ.ಯನ್ನು ಮೊನ್ನೆ ಪ್ಯಾಸು ಮಾಡಿದವ?

ಪ್ರಭಾತ:— ಅವನನ್ನು ಯಾರಿಗೆ ಕೊಟ್ಟು ಮದುವೆಯಂತೆ?

ಮೋಹನ:— ನೀವೆಲ್ಲಿದ್ದೀರಪ್ಪ? ಸ್ತ್ರೀಯರಂತೆ ಏನೂ ಗೊತ್ತಿಲ್ಲದಂತೆ ನಟಸುತ್ತಿರುವಿರಿ!

ಪ್ರಭಾತ: — ನಟನೆ ಅಲ್ಲ, ನಿಜವಾಗಿಯೂ ನನಗೆ ಗೊತ್ತಿಲ್ಲ

ಮೋಹನ:— ಹಾಗಾದರೆ ಕೇಳಿ. ಬಲರಾಮನಿಗೆ ತಾಯಿಯೂ ಇಲ್ಲ, ತಂದೆಯೂ ಇಲ್ಲವಷ್ಟೇ? ಅವನನ್ನು ಸಾಕಿ ಸಲಹಿದ ಲಕ್ಷ್ಮಣಜ್ಜನು ಈಗ್ಗೆ ಎರಡು ಮೂರು ವರ್ಷಗಳಿಂದ ಅವನಿಗೆ ನೆಂಟಸ್ತಿಕೆಯನ್ನು ಹುಡುಕುತ್ತಲೇ ಇದ್ದನು. ಆದರೆ ಬಡವರ ಹುಡುಗನನ್ನು ಯಾರು ವರಿಸಿಕೊಳ್ಳುತ್ತಾರೆ? ಲಕ್ಷ್ಮಣಜ್ಜನು ಈ ದಿನಗಳಲ್ಲಿ ಹೊಟ್ಟೆ ಹೊರಕೊಳ್ಳುವುದೇ ದೊಡ್ಡದು. ಅಂಥವನೆಲ್ಲಿಂದ ವಧೂದಕ್ಷಿಣೆಯನ್ನು ತಂದುಕೊಡುವುದು? ಹುಡುಗನ ವಿದ್ಯೆಯನ್ನಾದರೂ ಮೆಚ್ಚಿ ಯಾರಾದರೂ ಕೊಂಡುಹೋಗಲಿ ಎಂದು ಅವನನ್ನು ಬಿ ಏ. ವರೆಗೆ ಕಲಿಸಿ ಸುಮ್ಮನೆ ಇದ್ದನು.

ದಿನಕರ:— ಈಗ ಹುಡುಗನನ್ನು ಯಾರು ಕೊಂಡುಹೋಗಲು ಬಂದಿರುವರಂತೆ?

ಮೋಹನ:— ವಿಲಾಯತಿಯಿಂದ ಮೊನ್ನೆ ತಾನೆ ಐ. ಸೀ. ಎಸ್ಸೋ ಏನೋ ಎಂತ ಹೇಳುತ್ತಾರಲ್ಲ, ಆ ಪರೀಕ್ಷೆಯನ್ನು ಪ್ಯಾಸು ಮಾಡಿ ಬಂದ ಜಯವಂತಿ ದೇವಿಯರ ಹೆಸರನ್ನು ಕೇಳಲಿಲ್ಲವೇ?

ನರಸಯ್ಯ:— ಹೌದು, ಮೊನ್ನೆ ಅವರು ಇದೇ ಮಾರ್ಗದಲ್ಲಿ ಕಾರನ್ನು ಓಡಿಸಿಕೊಂಡು ಹೋಗುತ್ತಿರುವಾಗ್ಗೆ ನಾನು ಅವರನ್ನು ಕಂಡದ್ದು ಅವರು ಆ ಹುಡುಗ ಬಲರಾಮನನ್ನು ವರಿಸುವರೇನು?

ಮೋಹನ:— ಅದನ್ನೇ ನಾನು ಹೇಳಲಿಕ್ಕೆ ಹೋಗುತ್ತಿದ್ದೆ. ಇಂದು ಬೆಳಿಗ್ಗೆ ಅವರ ವರನ ಪರೀಕ್ಷೆ ಆಯಿತಂತೆ. ಹುಡುಗನನ್ನು ನೋಡಿ ಬಹಳ ಮೆಚ್ಚಿಹೋಗಿದ್ದಾರಂತೆ.

ನರಸಯ್ಯ:— ಅಂತಹ ಪತ್ನಿ ಸಿಕ್ಕಬೇಕಾದರೆ ಬಲರಾಮನು ಹಿಂದಿನ ಜನ್ಮದಲ್ಲಿ ವಿಶೇಷ ಪುಣ್ಯವನ್ನು ಗಳಿಸಿದ್ದಿರಬೇಕು.

ಪ್ರಭಾತ:— ವಧೂದಕ್ಷಿಣೆ ಏನಂತೆ?

ಮೋಹನ:— ನಾನು ಆಗಲೇ ಹೇಳಿಲ್ಲವೇ, ಲಕ್ಷ್ಮಣಜ್ಜನು ಅದನ್ನೆಲ್ಲಿಂದ ತರುವುದೆಂದು? ಜಯವಂತಿದೇವಿಯರು ಒಂದು ಕಾಸು ವಧೂದಕ್ಷಿಣೆಯನ್ನಾದರೂ ತೆಗೆದುಕೊಳ್ಳುವುದಿಲ್ಲವೆಂದು ಹೇಳಿದ್ದಾರಂತೆ.

ದಿನಕರ:— ಇನ್ನು ಮುದುಕನು ಸ್ವಸ್ಥಚಿತ್ತನಾಗಿ ಸಾಯಬಹುದು.

ನರಸಯ್ಯ:— ಅಲ್ಲವೇನು ಮತ್ತೆ? ತಾಯಿತಂದೆಯಿಲ್ಲದ ಹುಡುಗನಿಗೆ ಒಳ್ಳೇ ಅತ್ತೆಯ ಮನೆಯೂ ಸಿಕ್ಕಿದಂತಾಯಿತು.

ಮೋಹನ:— ಬಲರಾಮನಾದರೋ ಬಹಳ ಚುರುಕು ಹುಡುಗ. ಆದರೆ ಹುಡುಗರು ಎಷ್ಟು ಚುರುಕಿದ್ದರೂ ಪ್ರಯೋಜನವೇನು? ಇಂದಲ್ಲದಿದ್ದರೆ ನಾಳೆಯಾದರೂ ಗೃಹಕೃತ್ಯದ ಕೆಲಸಕ್ಕೆ ಸೇರಬೇಕಲ್ಲವೇ? ಆದರೂ ಅವನು ಹುಡುಗನಾಗಿ ಹುಟ್ಟಿದ್ದು ಮೋಸವಾಯಿತೆಂದು ಕಾಣುತ್ತದೆ.

ಹುಡುಗಿಯಾಗಿ ಜನಿಸಿದ್ದರೆ ಇಷ್ಟರೊಳಗೇನೇ ಅವನು ಹುಟ್ಟಿದ್ದ ಕುಲಕ್ಕೆ ಒಂದು ದೊಡ್ಡ ಹೆಸರನ್ನು ತರುತ್ತಿದ್ದನು.

ದಿನಕರ:— ಹುಡುಗನ ಚುರುಕುತನವನ್ನು ನೋಡಿ ಜಯವಂತಿ ದೇವಿಯರು ಅವನನ್ನು ಲಗ್ನವಾದ ಮೇಲೂ ಕಲಿಸ್ಯಾರು.

ಮೋಹನ:—ನಾನೂ ಹಾಗೆಯೇ ನಂಬುತ್ತೇನೆ.

ನರಸಯ್ಯ:— ಹೆಚ್ಚು ಕಲಿತು ಗಂಡಸರು ಮಾಡಬೇಕಾದುದೇನೆಂದು ತಿಳಿಯುವುದಿಲ್ಲವಲ್ಲ!

ಪ್ರಭಾತ:— ಕಾದಂಬರಿಗಳನ್ನು ಓದಿ ಅರ್ಥಮಾಡುವಷ್ಟು ಕಲಿತರೆ ಸಾಕೆಂದು ನನ್ನ ಮತ.

ನರಸಯ್ಯ: (ತನ್ನ ಮಾತನ್ನೇ ಮುಂದುವರಿಸುತ್ತ) ತುಂಬ ವಿದ್ಯಾವಂತರಾಗಿ, ನವನಾಗರಿಕತೆಯ ಹುಚ್ಚನ್ನು ತಲೆಯಲ್ಲಿ ತುಂಬಿಸಿಕೊಂಡು ಸಾಹೇಬರಂತೆ ತಿರುಗಾಡುವುದೂ ಇಚ್ಛೆ ಬಂದಾಗ ಮದುವೆಮಾಡಿಕೊಳ್ಳುವುದೂ ನಮ್ಮ ಹುಡುಗರಿಗೊಂದು ಶೋಭೆಯಲ್ಲ. ಈಗಿನ ನವನಾಗರಿಕತೆಯ ಅನೇಕ ಹುಡುಗರನ್ನು ನೋಡಿರುವೆನು. ಅವರು ಮಾಡುವ ಒಯ್ಯಾರಗಳನ್ನು ನೋಡಿದರೆ ನನಗೆ ಜುಮ್ಮೆನಿಸುತ್ತದೆ ಇಂಥವರ ವರ್ತನೆಯಿಂದಲ್ಲವೇ ನಮ್ಮ ಪುರುಷಜನ್ಮದ ಪವಿತ್ರತೆಯು ಕೆಡುವುದು? ನಾವೆಲ್ಲರೂ ಸ್ತ್ರೀಯರ ಅವಹೇಳನೆಗೆ ಪಾತ್ರರಾಗುವುದು? ಇವರ ಚರ್ಯೆಗಳನ್ನು ನೋಡುತ್ತಿರುವಾಗ ಪತ್ನಿವ್ರತಾ ಧರ್ಮವೆಂಬುದು ಹಿಂದಿನ ಮಾತಾಗುವುದೋ ಎಂಬ ಭೀತಿಯು ನನಗೆ ಹಿಡಿಯುತ್ತದೆ.

ಪ್ರಭಾತ:—ನನಗೇಕೋ ಈ ಸ್ತ್ರೀಯರ ವಿಷಯದಲ್ಲಿ ತುಂಬ ಬೇಸರ ಬಂದಿದೆ. ಪತ್ನಿಯೂ ಬೇಡ, ಮನೆಯೂ ಬೇಡ, ಏನೂ ಬೇಡವೆನಿಸುತ್ತದೆ

ನರಸಯ್ಯ:—(ತನ್ನ ಕಿವಿಗಳನ್ನು ಬೆರಳುಗಳಿಂದ ಮುಚ್ಚಿಕೊಂಡು) ಛೆ! ಛೆ! ಛೆ! ಗಂಡಸರಾಗಿ ನಾವು ಅಂತಹ ಮಾತುಗಳನ್ನು ಎಂದಿಗೂ ಆಡಬಾರದು. ಜಗತ್ತು ಬೇಕಾದುದನ್ನು ಹೇಳಲಿ. ನಮ್ಮ ಪಾಲಿಗೆ ನಮ್ಮ ಪತ್ನಿಯರೇ ದೇವತೆಗಳು! ಪತ್ನಿವ್ರತವೇ ನಮ್ಮ ಅತಿ ಶ್ರೇಷ್ಠವಾದ ಧರ್ಮವು!

(ಮೋಟರ್‌ಕಾರಿನ ಪೋಂ ಪೋಂ ಶಬ್ದವು ಕೇಳಿಬರುವುದು. ನರಸಯ್ಯನು ಕೂಡಲೇ ಎದ್ದು ನಿಲ್ಲುವನು.)

ಆರೆರೆ! ಬಾಯಿ ಸಾಹೇಬರು ಕ್ಲಬ್ಬಿನಿಂದ ಬಂದೇ ಬಿಟ್ಟರು.

ಪ್ರಭಾತ:— ಇಂದೇನು ಅವರು ಇಷ್ಟು ಬೇಗ ಬಂದುದು?

ನರಸಯ್ಯ:—(ನಾಚಿಕೆಯಿಂದ) ನನ್ನನ್ನು ಇಂದು ಸಿನೇಮಾಕ್ಕೆ ಕರ ಕೊಂಡು ಹೋಗಲಿರುವರು.

ದಿನಕರ:— ಪತ್ನೀವ್ರತದ ಪ್ರಭಾವವಿದು! ಹಾಗಾದರೆ ಇನ್ನು ಇಲ್ಲಿ ನಮಗೆ ಕೆಲಸವಿಲ್ಲ. ಹೋಗುವೆವು. ನಮಸ್ಕಾರ.

ನರಸಯ್ಯ:— ನಮಸ್ಕಾರ. ಇನ್ನೊಂದು ದಿನ ಬೇಗ ಬರಲಾರಿರಾ?

(ನರಸಯ್ಯನಲ್ಲದೆ ಇತರರೆಲ್ಲರೂ ಹೋಗುವರು ನರಸಯ್ಯನು ಯೌವನಾ ಬಾಯಿಯ ಉಪಚಾರಣೆಗಾಗಿ ಎಲ್ಲವನ್ನೂ ಸಿದ್ಧಮಾಡುವನು. ಅಂತೆಯೇ ತೆರೆಯು ಬೀಳುವುದು.)



ಇದು




ಪುಷ್ಪಮಾಲೆಯ ಒಂದು ಪುಷ್ಪ.